



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 57

ಸಂಪುಟ: ೦೬ ಸಂಚಿಕೆ: ೭ Vol. 06 Issue 7 | ಅಕ್ಟೋಬರ್ ೨೦೧೯ October 2019 | ಪುಟಗಳು ೮ Pages - 8 | ವಾರ್ಷಿಕ ಚಂದ ರೂ. ೨೦/– A. Sub. - Rs. 20/- | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ Editor : Sri. B.R. Ravindranath



೧೫–೯–೨೦೧೯

## ಶ್ರೀಮತಿ ಸಾವಿತ್ರಮ್ಮ – ಎಂ.ವಿ.ಸೀತಾರಾಮಯ್ಯ ಪುರಸ್ಕಾರ ಪ್ರದಾನ ಕಾರ್ಯಕ್ರಮ

ಬಿ.ಎಂ.ಶ್ರೀ ಪ್ರತಿಷ್ಠಾನವು ಪ್ರತಿ ವರ್ಷಕೊಡಮಾಡುವ ಶ್ರೀಮತಿ ಸಾವಿತ್ರಮ್ಮ– ಪ್ರೊ॥ಎಂ.ವಿ.ಸೀತಾರಾಮಯ್ಯ ಸಾಹಿತ್ಯ ಪುರಸ್ಕಾರವನ್ನು ಈ ವರ್ಷ ಖ್ಯಾತ ಸಾಹಿತಿಗಳೂ ಮತ್ತು ಸಂಘಟಕರೂ ಎಂದು ಹೆಸರಾಗಿರುವ ಡಾ. ನಾ. ಮೊಗಸಾಲೆಯವರಿಗೆ, ನೀಡಲಾಯಿತು. ಪುರಸ್ಕಾರ ಪ್ರದಾನ ಸಮಾರಂಭದಲ್ಲಿ, ಪುರಸ್ಕೃತ ಡಾ. ನಾ. ಮೊಗಸಾಲೆಯವರೊಂದಿಗೆ ಹಲವು ದಶಕಗಳ ಒಡನಾಟವನ್ನು ಹೊಂದಿದ್ದ ಡಾ. ಪುಂಡಿಕಾಯ್ ಗಣಪಯ್ಯ ಭಟ್ ಅವರು ಮೊಗಸಾಲೆಯರನ್ನು ಕುರಿತು ಅಭಿನಂದನಾ ಭಾಷಣವನ್ನುಮಾಡುತ್ತಾ, ೫೪ ವರ್ಷಗಳಿಂದ ನಡೆಸಿಕೊಂಡು ಬಂದ ಮೊಗಸಾಲೆಯವರ ಸಾಹಿತ್ಯಸೇವೆ, ಸಂಘಟನಾ ಸಾಮರ್ಥ್ಯವಲ್ಲದೆ ಅವರ ವ್ಯಕ್ತಿತ್ವದ ಹಲವು ಮುಖಗಳನ್ನು ಪರಿಚಯಿಸಿದರು.

ಮೊದಲು, ಶ್ರೀಮತಿ ಮನೋರಮಾ ನಾಡಗೀತೆಯನ್ನು ಹಾಡಿ ಕಾರ್ಯಕ್ರಮಕ್ಕೆ ನಾಂದಿ ಹಾಡಿದರು. ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಆರ್. ಲಕ್ಷ್ಮೀನಾರಾಯಣ ಅವರು, ಪ್ರಾಸ್ತಾವಿಕ ನುಡಿಗಳ ಜೊತೆಗೆ, ಅತಿಥಿಗಳನ್ನು, ಸಭಿಕರನ್ನು ಸ್ವಾಗತಿಸಿದರು. ಕಾರ್ಯದರ್ಶಿಗಳಾದ ಡಾ.ವಿಜಯಾಸುಬ್ಬರಾಜ್ ಅಭಿನಂದನಾ ಪತ್ರ ವಾಚಿಸಿದರು. ನಂತರ, ಮಾಸ್ತಿ ಪ್ರಶಸ್ತಿ ಸಮಿತಿ ಅಧ್ಯಕ್ಷ ಹಾಗೂ ಖ್ಯಾತ ಸಾಹಿತಿಗಳಾದ ಪ್ರಕಾಶಕ ಶ್ರೀ ಮಾವಿನಕೆರೆ ರಂಗನಾಥನ್ ಅವರು ಡಾ. ನಾ. ಮೊಗಸಾಲೆಯವರಿಗೆ ಪುರಸ್ಕಾರವನ್ನು ಪ್ರದಾನ ಮಾಡಿ ಗೌರವಿಸಿದರು.

ಡಾ. ನಾ.ಮೊಗಸಾಲೆಯವರು, ಪುರಸ್ಕಾರ ನೀಡಿ ಗೌರವಿಸಿದ್ದಕ್ಕೆ, ತಮಗೆ ಅತೀವ ಸಂತೋಷವಾಗಿದೆಯೆಂದೂ, ತಾವೆಷ್ಟೇ ದೂರದಲ್ಲಿದ್ದರೂ, ಬೇರೆ ಬೇರೆ ಪ್ರಶಸ್ತಿ, ಪುರಸ್ಕಾರಗಳು ಸಂದಿವೆಯಾದರೂ, ಎಂವಿಸೀ ದಂಪತಿಗಳ ಹೆಸರಿನಲ್ಲಿ, ತಮಗೆ ನೀಡಿರುವ ಈ ಪುರಸ್ಕಾರಕ್ಕೆ ಹೆಚ್ಚಿನ ಮೌಲಿಕತೆಯಿದೆ ಎಂದು ಹೆಮ್ಮೆಯಿಂದ ತಮ್ಮ ಭಾವನೆಯನ್ನು ವ್ಯಕ್ತಪಡಿಸಿದರು. ತಮ್ಮ ಬದುಕಿನ ಹಲವು ಸಂದರ್ಭಗಳನ್ನು ನೆನಪಿಸಿಕೊಂಡರು. ತಮಗೆ ಸಂದ ಈ ಗೌರವಕ್ಕೆ. ಬಿ.ಎಂ.ಶ್ರೀ ಪ್ರತಿಷ್ಠಾನಕ್ಕೆ ತಾವು ಚಿರಋಣಿಗಳೆಂದು ಹೇಳಿದರು.

ಪ್ರತಿಷ್ಠಾನದ ಗೌರವಾಧ್ಯಕ್ಷರಾದ ನಾಡಿನ ಖ್ಯಾತ ವಿಮರ್ಶಕರಾದ ನಾಡೋಜ ಪ್ರೊ. ಎಂ.ಎಚ್. ಕೃಷ್ಣಯ್ಯ ಅವರು ಡಾ. ಮೊಗಸಾಲೆಯವರ ಕೃತಿಗಳ ಬಗ್ಗೆ ವಿಮರ್ಶಾತ್ಮಕ ನುಡಿಗಳನ್ನು ಹೇಳತ್ತಲೇ ತಮ್ಮ ಮೆಚ್ಚಿಗೆಯನ್ನು ವ್ಯಕ್ತಪಡಿಸಿದರು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಶ್ರೀ ಮಾವಿನಕೆರೆ ರಂಗನಾಥನ್ ಪ್ರೊ. ಎಂವಿಸೀ ಅವರ ಜೊತೆ ಇದ್ದ ತಮ್ಮ ಒಡನಾಟಗಳನ್ನು ನೆನಪಿಸಿಕೊಂಡು ಮೊಗಸಾಲೆಯವರೊಂದಿಗಿದ್ದ ಹಲವಾರು ವರ್ಷಗಳ ಸಾಹಿತ್ಯಿಕ ಒಡನಾಟದ ಸಂದರ್ಭಗಳನ್ನು, ಸಂಗತಿಗಳನ್ನು ಹಂಚಿಕೊಂಡರು. ಕಾರ್ಯದರ್ಶಿ ಶ್ರೀ ಬಿ.ಆರ್. ರವೀಂದ್ರನಾಥ್ ಅವರು ಅತಿಥಿಗಳಿಗೆ ಸಭಿಕರಿಗೆ, ಮಾಧ್ಯಮದವರಿಗೆ ವಂದನೆ ಸಲ್ಲಿಸಿದರು.




ಡಾ. ಎಸ್. ಅನಿಲ್‌ಕುಮಾರ್ ಅವರು ಕಾರ್ಯಕ್ರಮ ನಿರೂಪಣೆಯನ್ನು ಅಚ್ಚುಕಟ್ಟಾಗಿ ನಿರ್ವಹಿಸಿದರು.

## ಸಂಪಾದಕೀಯ

ಇತ್ತೀಚೆಗೆ ಕೇಂದ್ರ ಗೃಹ ಸಚಿವ ಅಮಿತ್ ಶಾ ರವರು ಹಿಂದಿ ದಿವಸದಂದು ಮಾಡಿದ ಒಂದು ಭಾಷಣದಲ್ಲಿ ಹಿಂದಿ ಭಾಷೆಯ ಬಗ್ಗೆ ನೀಡಿದ ಹೇಳಿಕೆಯ ಪ್ರಭಾವದಿಂದ ಬಿಸಿಬಿಸಿ ಚರ್ಚೆಗಳು ನಡೆಯುತ್ತಿವೆ.

ಭಾರತದಲ್ಲಿ ೩೩೭ ಭಾಷೆಗಳು ಬಳಕೆಯಲ್ಲಿದ್ದು ಭಾರತೀಯ ಸಂವಿಧಾನದ ೮ನೇ ಷೆಡ್ಯೂಲ್ ಅಡಿಯಲ್ಲಿ ೨೨ ಅಧಿಕೃತ ಭಾಷೆಗಳನ್ನು ಮಾನ್ಯ ಮಾಡಲಾಗಿದೆ. ಭಾರತದ ರಾಜ್ಯಗಳನ್ನು ೧೯೫೬ರಲ್ಲಿ ಭಾಷೆಗಳ ಆಧಾರದ ಮೇಲೆಯೇ ಪುನರ್‌ರಚಿಸಲಾಗಿರುತ್ತದೆ. ಭಾರತದಲ್ಲಿ ಎಲ್ಲ ರಾಜ್ಯಗಳ ನಡುವೆ ಸಂಪರ್ಕ ಭಾಷೆಯಾಗಿ ಇಂಗ್ಲೀಷ್ ಆಗಿರಬೇಕು ಎಂದು ಹಿಂದಿಯೇತರ ರಾಜ್ಯಗಳ ನಿಲುವಾಗಿದ್ದರೆ ಹಿಂದಿ ಬಳಸುವ ರಾಜ್ಯಗಳು ಹಿಂದಿಯೇಸಂಪರ್ಕ ಭಾಷೆಯಾಗಿರಬೇಕು ಎಂಬ ನಿಲುವನ್ನು ತಳೆದಿರುತ್ತವೆ.

ಬ್ರಿಟಿಷರ ಭಾರತವನ್ನು ಸುಮಾರು ೨೦೦ ವರ್ಷಆಳಿದ ನಂತರವೇ ಭಾರತ ಏಕೀರಕರಣಗೊಂಡಿತು ಎನ್ನುವುದರಲ್ಲಿ ಸಂಶಯವಿಲ್ಲ. ಬ್ರಿಟಿಷರು ಭಾರತವನ್ನು ಆಕ್ರಮಿಸುವ ಮುನ್ನವೂ ಭಾರತದ ವಿವಿಧ ಭಾಗಗಳಲ್ಲಿ ವಿವಿಧ ಭಾಷೆಗಳನ್ನು ಬಳಸುತ್ತಿದ್ದದ್ದು ನಿಜ. ಆಗ ಎಲ್ಲರೂ ಒಂದೇ ಭಾಷೆಯನ್ನು ಬಳಸುವ ಪರಿಕಲ್ಪನೆಯಾಗಲೀ ಅಥವಾ ಎಲ್ಲರೂ ಒಂದು ಸಂಪರ್ಕ ಭಾಷೆಯನ್ನು ಬಳಸಬೇಕೆಂಬ ಪರಿಕಲ್ಪನೆಯಾಗಲೀ ಇರಲಿಲ್ಲ. ಅಗತ್ಯಕ್ಕೆತಕ್ಕಂತೆ, ಯಾರಜೊತೆ ವ್ಯಾಪಾರ ಮಾಡಬೇಕೋ ಅದರ ಭಾಷೆಯನ್ನು ಕಲಿತು ಆ ಭಾಷೆಯನ್ನು ಬಳಸಿಕೊಂಡು ತಮ್ಮ ವ್ಯಾಪಾರಗಳನ್ನು ನಡೆಸುತ್ತಿದ್ದರು.

ಶತಮಾನಗಳ ಕಾಲದ ಹಿಂದೆ ಬೇರೆ ಭಾಷೆಯನ್ನು ಕಲಿತುಕೊಂಡು ಬಳಕೆ ಮಾಡಲು ಬಹಳಷ್ಟು ತೊಡಕುಗಳಿದ್ದವು. ಈಗ ತಂತ್ರಜ್ಞಾನ ಹಾಗೂ ಇತರ ಅನುಕೂಲತೆಗಳ ಕಾರಣಗಳಿಂದ ಬೇರೆ ಭಾಷೆಗಳನ್ನು ಕಲಿಯುವುದು ಹಾಗೂ ಬಳಕೆ ಮಾಡುವುದು ಸುಲಭಗೊಂಡಿರುತ್ತದೆ.

ದಿನಾಂಕ ೧ನೇ ನವೆಂಬರ್ ೧೯೯೩ ರಂದು ೨೮ ಐರೋಪ್ಯ ದೇಶಗಳು ಭಾಗಶಃ ವಿಲೀನಗೊಂಡು ಯೂರೋಪಿಯನ್ ಯೂನಿಯನ್ ಸ್ಥಾಪಿತಗೊಂಡಿತು. ಈ ಯೂನಿಯನ್‌ನಲ್ಲಿ ೨೪ ಭಾಷೆಗಳನ್ನು ಬಳಕೆ ಮಾಡಲಾಗುತ್ತಿದೆ. ಇಂಗ್ಲೀಷ್ ಹಾಗೂ ಫ್ರೆಂಚ್ ಭಾಷೆಗಳು ಈ ಎಲ್ಲಾ ದೇಶಗಳಲ್ಲಿ ಹೆಚ್ಚು ಬಳಕೆಯಲ್ಲಿದ್ದರೂ ಯಾವುದೇ ಸಂಪರ್ಕ ಭಾಷೆಯನ್ನು ಗುರುತಿಸಿರುವುದಿಲ್ಲ ಹಾಗೂ ಯಾವುದೇ ಸಂಪರ್ಕ ಭಾಷೆಯನ್ನು ಬಳಸುತ್ತಿಲ್ಲ. ಎಲ್ಲಾ ಭಾಷೆಗಳಿಗೂ ಸಮಾನ ಮಾನ್ಯತೆ ನೀಡಲಾಗಿದೆ. ಯಾವುದೇ ದೇಶಕ್ಕೆ ಸಂಬಂಧಿಸಿದ ಪ್ರಸ್ತಾವನೆಗಳನ್ನು ೨೪ ದೇಶದ ಎಲ್ಲ ಭಾಷೆಗಳಿಗೆ ಅನುವಾದಿಸಿ ಕಳುಹಿಸಿಕೊಡಲಾಗುತ್ತಿದೆ. ಈ ಉದ್ದೇಶಕ್ಕಾಗಿಯೆ ಯುರೋಪಿಯನ್ ಯೂನಿಯನ್‌ನ ಡೈರೆಕ್ಟರ್ ಜೆನರಲ್ ಆಫ್ ಟ್ರಾನ್ಸಲೇಷನ್ ಕಚೇರಿಯು ಕಾರ್ಯ ನಿರ್ವಹಿಸುತ್ತಿದೆ. ಈ ಕಚೇರಿಯಲ್ಲಿ ೧೭೫೦ ಅನುವಾದಕರು ನೇಮಕಗೊಂಡಿರುತ್ತಾರೆ.

ಈಗ ಜಾರಿ ಮಾಡಲು ಸಾಧ್ಯವಾಗಿಲ್ಲದಿರುವ ತ್ರಿಭಾಷಾ ಸೂತ್ರದ ಬದಲಾಗಿ ಭಾರತದಲ್ಲಿಯೂ ಇದೇ ಮಾದರಿಯನ್ನು ಅನುಸರಿಸಿದಲ್ಲಿ ಬಹಳಷ್ಟು ಅನುಕೂಲಗಳಿವೆ.

– ಬಿ.ಆರ್.ರವೀಂದ್ರನಾಥ

### ಅಕ್ಟೋಬರ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಟಿ.ಎಸ್. ವೆಂಕಣ್ಣಯ್ಯ | ೧-೧೦-೧೮೫೫ |
| ಬಸರಾಜ ಕಟ್ಟಿಮನಿ | ೫-೧೦-೧೯೧೯ |
| ಎಲ್. ಬಸವರಾಜು | ೭-೧೦-೧೯೧೯ |
| ಶಿವರಾಮ ಕಾರಂತ | ೧೦-೧೦-೧೯೦೨ |
| ಕೆರೂರ ವಾಸುದೇವ ಚಾರ್ಯ | ೧೫-೧೦-೧೮೬೬ |
| ಡಿಎಲ್ ನರಸಿಂಹಚಾರ್ಯ | ೨೭-೧೦-೧೯೦೬ |
| ಚನ್ನಪ್ಪ ಉತ್ತಂಗಿ | ೨೮-೧೦-೧೮೮೧ |

### ಅಕ್ಟೋಬರ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಡಿವಿಜಿ | ೭-೧೦-೧೯೭೫ |
| ಡಾ.ಆ.ನೇ. ಉಪಾಧ್ಯೆ | ೯-೧೦-೧೯೭೫ |
| ಪುತಿನ | ೧೩-೧೦-೧೯೯೮ |
| ಶ್ರೀರಂಗ | ೧೭-೧೦-೧೯೮೪ |
| ಚದುರಂಗ (ಎಂ. ಸುಬ್ರಹ್ಮಣ್ಯರಾಜ ಅರಸ್) | ೧೯-೧೦-೧೯೯೮ |
| ತಿರುಮಲೆ ತಾತಾಚಾರ್ಯ ಶರ್ಮ | ೨೦-೧೦-೧೯೭೩ |
| ಬಸವರಾಜ ಕಟ್ಟೀಮನಿ | ೨೩-೧೦-೧೯೮೯ |
| ದೇವುಡು | ೨೪-೧೦-೧೯೬೨ |
| ವ್ಯಾಕರಣ ತೀರ್ಥ ಚಂದ್ರ ಶೇಖರ ಶಾಸ್ತ್ರಿಗಳು | ೨೪-೧೦-೧೯೯೭ |
| ಪಂಜೆಮಂಗೇಶರಾವ್ | ೨೪-೧೦-೧೯೩೭ |
| ದ.ರಾ. ಬೇಂದ್ರೆ | ೨೬-೧೦-೧೯೮೬ |
| ಎಸ್.ವಿ. ಪರಮೇಶ್ವರ ಭಟ್ಟ | ೨೭-೧೦-೨೦೦೦ |
| ಆನಂದಕಂದ (ಬೇಟಗೇರಿ ಕೃಷ್ಣಶರ್ಮಾ) | ೩೦-೧೦-೧೯೮೨ |

### ಶ್ರೀ ಸ್ವಾಮಿ ಪೊನ್ನಾಚಿ ಹಾಗೂ ಶ್ರೀ ಸಂತೆ ನಾರಾಯಣಸ್ವಾಮಿ ಅವರಿಗೆ ಶಾ. ಬಾಲೂರಾವ್ ಪ್ರಶಸ್ತಿಗಳು

ಪ್ರತಿವರ್ಷ ಮೊದಲ ಮುದ್ರಣವಾಗಿ ಪ್ರಕಟಗೊಂಡ ಕೃತಿಗಳಿಗಾಗಿ ಬಿ ಎಂ ಶ್ರೀ ಪ್ರತಿಷ್ಠಾನವು ಕೊಡಮಾಡುವ 'ಶಾ. ಬಾಲೂರಾವ್ ಯುವ ಬರಹಗಾರ ಪ್ರಶಸ್ತಿ'ಗೆ ಶ್ರೀ ಸ್ವಾಮಿ ಪೊನ್ನಾಚಿ ಅವರ 'ಧೂಪದ ಮಕ್ಕಳು' ಕೃತಿಯನ್ನೂ, 'ಶಾ. ಬಾಲೂರಾವ್ ಅನುವಾದ ಪ್ರಶಸ್ತಿ'ಗೆ ಶ್ರೀ ಸಂತೆ ನಾರಾಯಣ ಸ್ವಾಮಿ ಅವರ 'ಜಹನಾರ'ಅನುವಾದ ಕೃತಿಯನ್ನೂ ೨೦೧೮ ರಲ್ಲಿ ಮೊದಲ ಮುದ್ರಣವಾಗಿ ಪ್ರಕಟಗೊಂಡವುಗಳಲ್ಲಿ ಶ್ರೇಷ್ಠ ಕೃತಿಗಳೆಂದು ಆಯಾ ಆಯ್ಕೆ ಸಮಿತಿಗಳು ಆಯ್ಕೆ ಮಾಡಿರುತ್ತವೆ.

ಪ್ರತಿ ಪ್ರಶಸ್ತಿಯೂ ರೂ. ೨೫,೦೦೦/– ನಗದು ಹಾಗೂ ಸ್ಮರಣಿಕೆಯನ್ನು ಒಳಗೊಂಡಿರುತ್ತದೆ. ಈ ಪ್ರಶಸ್ತಿ ಪ್ರದಾನ ಸಮಾರಂಭವು ಅಕ್ಟೋಬರ್ ೨೦, ೨೦೧೯ ರಂದು ಭಾನುವಾರ ಬೆಳಿಗ್ಗೆ ೧೦-೩೦ ಗಂಟೆಗೆ ಪ್ರತಿಷ್ಠಾನದ ಎಂ.ವಿ.ಸೀ ಸಭಾಂಗಣದಲ್ಲಿ ನೆರವೇರಲಿದೆ. ಕೇಂದ್ರ ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾಗಿರುವ ಡಾ.ಚಂದ್ರಶೇಖರ ಕಂಬಾರ ಅವರು ಸಮಾರಂಭದ ಅಧ್ಯಕ್ಷತೆ ವಹಿಸಿ ಪ್ರಶಸ್ತಿ ಪ್ರದಾನ ಮಾಡಲಿದ್ದಾರೆ.

### ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಚಂದಾ

ಪ್ರತಿಷ್ಠಾನವು ಪ್ರಕಟಿಸುತ್ತಿರುವ ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಚಂದಾ : ವಾರ್ಷಿಕ ರೂ. 100/– (ವರ್ಷದಲ್ಲಿ ಎರಡು ಸಂಚಿಕೆಗಳನ್ನು ಪ್ರಕಟಿಸಲಾಗುತ್ತಿದೆ) ಆಜೀವ ಚಂದಾ ರೂ. 1500/– ಆಗಿರುತ್ತದೆ. ಎಲ್ಲಾ ಸಾಹಿತ್ಯಾಸಕ್ತರೂ ಈ ವಿದ್ವತ್ ಪತ್ರಿಕೆಗೆ ಚಂದಾದಾರಾಗಬೇಕೆಂದು ಕೋರುತ್ತೇವೆ.

# ಅಕ್ಟೋಬರ್ ೨೦೧೯ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿ.ಎಂ.ಶ್ರೀ. ಪ್ರತಿಷ್ಠಾನ



**ದಿನಾಂಕ : ೦೫-೧೦-೨೦೧೯ ಶನಿವಾರ ಮಧ್ಯಾಹ್ನ ೩-೦೦ಗಂಟೆಗೆ**

ಬಿ.ಎಂ.ಶ್ರೀ ಪ್ರತಿಷ್ಠಾನದ ಸಹಯೋಗದೊಂದಿಗೆ

ಲೇಖಿಕಾ ಸಾಹಿತ್ಯ ವೇದಿಕೆಯ

ಪ್ರಪ್ರಥಮ ಕಾರ್ಯಕ್ರಮ

**ವಿಷಯ : ಹೊಸ ಓದು ಮತ್ತು ಸಂವಾದ**

ಆಹ್ವಾನಿತರು : ಡಾ. ವಿಜಯಾ ಸುಬ್ಬರಾಜ್

**ದಿನಾಂಕ : ೧೦ -೧೦-೨೦೧೯ ಗುರುವಾರ ಸಂಜೆ: ೫-೩೦ಗಂಟೆಗೆ**

"ಅಕ್ಕರಗೊಟ್ಟಿ"-೫೫

ತಿಂಗಳ ಮುಕ್ತ ಚಿಂತನೆ

ವಿಷಯ :. 'ಇರುಳು ತಪ್ಪು', 'ಘಟಸ್ಫೋಟ' ನುಡಿಗಟ್ಟುಗಳ ಸಾಂಸ್ಕೃತಿಕ ವಿಶ್ಲೇಷಣೆ

ಚಾಲನೆ ನೀಡುವವರು : ಡಾ. ಎನ್.ಆರ್. ಲಲಿತಾಂಬ, ಕನ್ನಡ ಪ್ರಾಧ್ಯಾಪಕರು

**ದಿನಾಂಕ : ೧೬-೧೦-೨೦೧೯ ಬುಧವಾರ ಸಂಜೆ : ೪-೩೦ಕ್ಕೆ**

ಸಾಹಿತ್ಯ ಸಂಚಲನ-೧೩

ಅತಿಥಿ : ಡಾ. ಗೀತಾ ಕೃಷ್ಣಮೂರ್ತಿ, ಖ್ಯಾತ ಸಾಹಿತಿ ಮತ್ತು ಕಾನೂನು ತಜ್ಞೆ

ವಿಷಯ : ಕೌಟುಂಬಿಕ ಕಾನೂನುಗಳು – ಒಂದು ಸಂವಾದ

**೨೦-೧೦-೨೦೧೯ ಭಾನುವಾರ ಬೆಳಗ್ಗೆ : ೧೦-೩೦ಗಂಟೆಗೆ**



ಶಾ. ಬಾಲೂರಾವ್ ಯುವಬರಹಗಾರ ಪ್ರಶಸ್ತಿ ಮತ್ತು ಶಾ. ಬಾಲೂರಾವ್ ಅನುವಾದ ಪ್ರಶಸ್ತಿ ಪ್ರದಾನ ಸಮಾರಂಭ

ಅಧ್ಯಕ್ಷತೆ ಮತ್ತು ಪ್ರಶಸ್ತಿ ಪ್ರದಾನ : ಡಾ. ಚಂದ್ರಶೇಖರ ಕಂಬಾರ

ಯುವಬರಹಗಾರ ಪ್ರಶಸ್ತಿ ಪುರಸ್ಕೃತರು : ಸ್ವಾಮಿ ಪೊನ್ನಾಚಿ

ಅನುವಾದ ಪ್ರಶಸ್ತಿ ಪುರಸ್ಕೃತರು : ಸಂತೆ ನಾರಾಯಣಸ್ವಾಮಿ

**ದಿನಾಂಕ : ೨೩-೧೦-೨೦೧೯ ಬುಧವಾರ ಸಂಜೆ : ೫-೩೦ಗಂಟೆಗೆ**

ಶ್ರೀ ಎಂ.ಎ. ರಾಮಾನುಜಯ್ಯಂಗಾರ್ ದತ್ತಿ ಕಾರ್ಯಕ್ರಮ

ವಿಷಯ : ಬಿ.ಎಂ.ಶ್ರೀಅವರ ವಿದ್ವತ್ತು ಮತ್ತು ಸಂಶೋಧನ ಮುಖ

ಉಪನ್ಯಾಸಕರು : ಡಾ. ಎನ್.ಎಸ್. ತಾರಾನಾಥ್, ಮೈಸೂರು ವಿಶ್ವವಿದ್ಯಾಲಯದ ನಿವೃತ್ತ ಕನ್ನಡ ಪ್ರಾಧ್ಯಾಪಕರು

**ದಿನಾಂಕ : ೨೪-೧೦-೨೦೧೯ ಗುರುವಾರ ಸಂಜೆ : ೫-೦೦ ಗಂಟೆಗೆ**

ನುಡಿಯಾರಾಧಕರ ಸ್ಮರಣೆ ಕಾರ್ಯಕ್ರಮ

ಟಿ.ಎಸ್. ವೆಂಕಣ್ಣಯ್ಯ, ಎಲ್. ಬಸವರಾಜು, ಕೆರೂರ ವಾಸುದೇವಾಚಾರ್ಯ, ಚನ್ನಪ್ಪ ಉತ್ತಂಗಿ, ಆ.ನೇ. ಉಪಾಧ್ಯೆ, ಶ್ರೀರಂಗ, ಚದುರಂಗ, ತಿರುಮಲೆ ತಾತಾಚಾರ್ಯ ಶರ್ಮ, ದೇವುಡು, ವ್ಯಾಕರಣ ತೀರ್ಥ ಚಂದ್ರಶೇಖರ ಶಾಸ್ತ್ರಿಗಳು, ಎಸ್.ವಿ. ಪರಮೇಶ್ವರ ಭಟ್ಟ, ಆನಂದಕಂದ ಅವರುಗಳ ಬದುಕು ಬರಹಗಳ ಬಗ್ಗೆ ವಿಚಾರ ಮಂಡನೆ- ಸಾಹಿತ್ಯಾಭಿಮಾನಿಗಳಿಂದ




# ಬಿ.ಎಂ.ಶ್ರೀ ಪ್ರತಿಷ್ಠಾನದ ೩೯ನೆ ವಾರ್ಷಿಕ ಸರ್ವಸದಸ್ಯರ ಸಭೆ

೨೫ನೇ ಆಗಸ್ಟ್ ೨೦೧೯ ರಂದು ಬಿಎಂಶ್ರೀ ಪ್ರತಿಷ್ಠಾನದ ೩೯ನೆ ವಾರ್ಷಿಕ ಸರ್ವಸದಸ್ಯರ ಸಭೆಯನ್ನು ನಡೆಸಲಾಯಿತು.

## ಅಭಿನಂದನೆಗಳು

**೨೫ನೇ ಆಗಸ್ಟ್ ೨೦೧೯ ರಂದು ನಡೆದ ೩೯ನೆ ವಾರ್ಷಿಕ ಸರ್ವಸದಸ್ಯರ ಸಭೆಯಲ್ಲಿ ಅವಿರೋಧವಾಗಿ ಚುನಾಯಿತರಾದ ಕಾರ್ಯಕಾರಿ ಸಮಿತಿ ಸದಸ್ಯರಿಗೆ ಹೊಂಗನಸು ಅಭಿನಂದಿಸುತ್ತದೆ.**



**ಶ್ರೀ ಬಿ.ಆರ್. ರವೀಂದ್ರನಾಥ್**, ವಿತ್ತೀಯ ಸಲಹೆಗಾರ, ಅನುವಾದಕ, ಲೇಖಕ,ನಿರ್ದೇಶಕ, ಇನ್ಸ್‌ಟಿಟ್ಯೂಟ್ ಆಫ್ ಟ್ರಾನ್ಸ್‌ಲೇಷನ್ ಸ್ಟಡೀಸ್, ಬೆಂಗಳೂರು,

ಹಲವಾರು ಸಮಿತಿಗಳಲ್ಲಿ, ಸಂಘ ಸಂಸ್ಥೆಗಳಲ್ಲಿ ಈ ಹಿಂದೆ ಹಾಗೂ ಈಗಸದಸ್ಯರಾಗಿಕಾರ್ಯನಿರ್ವಹಿಸ ುತ್ತಿದ್ದಾರೆ. ಇವರು ಫೆಬ್ರವರಿ ೨೦೧೪ರಿಂದ ಪ್ರತಿಷ್ಠಾನದ ಗೌರವ ಕಾರ್ಯದರ್ಶಿಗಳಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಇವರ ಆರು ಕೃತಿಗಳು ಪ್ರಕಟಣೆಗೊಂಡಿವೆ. ಹಲವಾರು ದೂರದರ್ಶನ ಹಾಗೂ ಆಕಾಶವಾಣಿ ಕಾರ್ಯಕ್ರಮಗಳಲ್ಲಿ ಭಾಗವಹಿಸಿರುತ್ತಾರೆ.



ವಾಣಿಜ್ಯಶಾಸ್ತ್ರ ಪ್ರಾಧ್ಯಾಪಕರಾದ **ಡಾ|| ಎಸ್. ಅನಿಲ್ ಕುಮಾರ್** ಅವರು ಪ್ರಸ್ತುತ ಎ.ಪಿ.ಎಸ್. ಮತ್ತು ಎಸ್.ಆರ್.ಎನ್ಆದರ್ಶ ಸಂಜೆ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿದ್ದಾರೆ. ಉದಯಭಾನು ಕಲಾ ಸಂಘದ ಕಾರ್ಯಕಾರಿ ಸಮಿತಿ ಸದಸ್ಯರಾಗಿ, ಸಂಸ್ಥೆಯ ಉಚಿತ ಉಪನ್ಯಾಸ ತರಗತಿಯಲ್ಲಿ ವಾಣಿಜ್ಯ ವಿಷಯವನ್ನು ಬೋಧಿಸುವುದತ್ತಿರುವುದಲ್ಲದೆ ಅನೇಕ ಸಾಮಾಜಿಕ ಕಾರ್ಯಕ್ರಮಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಪ್ರತಿಷ್ಠಾನದ ಆಂತರಿಕ ಲೆಕ್ಕ ಪರಿಶೋಧಕರಾಗಿ ಲೆಕ್ಕಪತ್ರ ವ್ಯವಸ್ಥೆಗಳನ್ನು ಗಣಕೀಕರಣಗೊಳಿಸುವ ಕಾರ್ಯವನ್ನು ಸಮರ್ಥವಾಗಿ ನಿರ್ವಹಿಸಿರುತ್ತಾರೆ. ಪ್ರಸ್ತುತ ೨೦೧೬ರಿಂದ ಕೋಶಾಧ್ಯಕ್ಷರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಇವರು ಪ್ರತಿಷ್ಠಿತ ಕೆಂಪೇಗೌಡ ಪ್ರಶಸ್ತಿ ಪುರಸ್ಕಾರವನ್ನು ಪಡೆದಿದ್ದಾರೆ.



**ಪ್ರೊ. ಜಿ. ಅಶ್ವತ್ಥನಾರಾಯಣ** : ಸರ್ಕಾರಿ ಡಿಗ್ರಿ ಕಾಲೇಜುಗಳಲ್ಲಿ ೩೦ ವರ್ಷ ಸೇವೆ ಸಲ್ಲಿಸಿ ಪ್ರಾಧ್ಯಾಪಕರಾಗಿ ನಿವೃತ್ತರು. ಹಂಪಿ ವಿಶ್ವವಿದ್ಯಾಲಯದ ಎಂ.ಫಿಲ್ ವಿದ್ಯಾರ್ಥಿಗಳಿಗೆ ಮಾರ್ಗದರ್ಶಕರು. ಕೆಎ.ಎಸ್, ಐಎಎಸ್ ವಿದ್ಯಾರ್ಥಿಗಳಿಗೆ ತರಬೇತಿ, ಸರ್ಕಾರಿ ಅಧಿಕಾರಿಗಳಿಗೆ ಆಡಳಿತ ಕನ್ನಡ ಶಿಬಿರಗಳನ್ನು ನಡೆಸಿದ್ದಾರೆ. ಅಮೇರಿಕಾದಲ್ಲಿ ಮಕ್ಕಳಿಗೆ ಕನ್ನಡ ಹೇಳಿಕೊಟ್ಟಿದ್ದಾರೆ. ಇವರು ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ೧೯೯೬ರಿಂದ ೨೦೧೩ರ ವರೆಗೆ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದರು. ಮತ್ತೆ ೨೦೧೬ರಲ್ಲಿ ಈಗ ೨೦೧೯-೨೦೨೨ರ ಅವಧಿಗೆ ಕಾರ್ಯಕಾರಿ ಸಮಿತಿಗೆ ಪುನರ್ ಆಯ್ಕೆಯಾಗಿರುತ್ತಾರೆ.



**ಪ್ರೊ. ಜಿ.ಅಬ್ದುಲ್ ಬಷೀರ್ :** ಬಹುಮುಖ ಚಿಂತಕರೂ, ನಿವೃತ್ತ ಕನ್ನಡ ಪ್ರಾಧ್ಯಪಕರೂ, ಹೆಸರಾಂತ ಸಾಹಿತಿಗಳೂ ಆದ ಬಷೀರ್, ಅಕ್ಷರಲೋಕದ ವಿಶಿಷ್ಟ ಸಾಧಕರು; ಕಾಯಕ ಸಂಸ್ಕೃತಿಯಲ್ಲಿ ಅರಳಿದ ಪ್ರತಿಭಾಶಾಲಿಗಳು. ಅನ್ಯಭಾಷಿಕರಿಗೆ ಅಲ್-ಅಮೀನ್ ಕಾಲೇಜು ಮತ್ತು ಸೆಂಟ್ರಲ್ ಕಾಲೇಜುಗಳಲ್ಲಿ ೨೦ವರ್ಷ ಕನ್ನಡ ಕಲಿಸಿದ್ದಾರೆ. ಇವರಿಗೆ ನಾಡ ಪ್ರಭು ಕೆಂಪೇಗೌಡ ಪ್ರಶಸ್ತಿ, ಉತ್ತಮ ಶಿಕ್ಷಕ ಪ್ರಶಸ್ತಿ, ಡಾ.ಟಿ.ವಿ.ವೆಂಕಟಾಚಲಶಾಸ್ತ್ರಿವಿದ್ವತ್ ದತ್ತಿ ಪ್ರಶಸ್ತಿ, ಗಂಗಾಧರಯ್ಯ ಮತ್ತು ಮಕ್ಕಳ ಸಾಹಿತ್ಯ ದತ್ತಿ ಪ್ರಶಸ್ತಿ ಇನ್ನು ಹಲವಾರು ಪ್ರಶಸ್ತಿ ಮತ್ತು ಪುರಸ್ಕಾರಗಳು ದೊರೆತಿವೆ. ಈ ಹಿಂದೆ ಬಿ.ಎಂ.ಶ್ರೀ ಪ್ರತಿಷ್ಠಾನದ ಗೌರವ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ್ದಾರೆ.



**ಡಾ. ಬಿ.ಸಿ.ರಾಜಕುಮಾರ್** : ವಿಜಯ ಕಾಲೇಜಿನ ಹಿರಿಯ ಕನ್ನಡ ಉಪಾನ್ಯಾಸಕರಾಗಿ ೧೯ ವರ್ಷಗಳಿಂದ ಸುದೀರ್ಘಸೇವೆ ಸಲ್ಲಿಸುತ್ತಿದ್ದಾದ್ದಾರೆ. ಹಂಪಿ ವಿಶ್ವವಿದ್ಯಾನಿಲಯದ ಎಂ.ಫಿಲ್. ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡುವುದರೊಂದಿಗೆ ಹಲವಾರು ಸಂಸ್ಥೆಗಳ ಜೊತೆ ನಿಕಟ ಸಂಬಂಧ ಹೊಂದಿದ್ದಾರೆ.



**ಶ್ರೀನಿವಾಸ ಮೂರ್ತಿ :** ಕೆನರಬ್ಯಾಂಕ್ ನಿವೃತ್ತ ಅಧಿಕಾರಿ ಸಹ್ಯಾದ್ರಿ ಸಂಘ ಜೆಸಿಬಿಎಮ್ ಕಾಲೇಜ್ ಹಿರಿಯ ವಿದ್ಯಾರ್ಥಿಗಳ ಸಂಘ, ಬೆಂಗಳೂರಿನ ಸುಚಿತ್ರ ಫಿಲಂ ಸೊಸೈಟಿ, ಭಾರತೀಯ ವಿದ್ಯಾಸಂಸ್ಥೆ ಮತ್ತು ಇನ್ನಿತರ ಸಂಘ ಸಂಸ್ಥೆಗಳಲ್ಲಿ ಸೇವೆ. ವಿಶೇಷ ಆಸಕ್ತಿ ಕಾವ್ಯರಚನೆ, ಇವರ ನಾಲ್ಕು ಕೃತಿಗಳು, ಪ್ರಕಟಗೊಂಡಿವೆ.



**ಡಾ.ಹೆಚ್.ಎಸ್. ಎಂ ಪ್ರಕಾಶ್:** ಜನವರಿ ೧೯೮೦ರಿಂದ ಮೇ ೨೦೧೫ರವರೆಗೆ ಭಾರತೀಯ ಭೂ ವೈಜ್ಞಾನಿಕ ಸರ್ವೇಕ್ಷಣ ಸಂಸ್ಥೆಯಲ್ಲಿ ಭಾರತದಾದ್ಯಂತ ಸೇವೆಸಲ್ಲಿಸಿದ್ದಾರೆ. ನವದೆಹಲಿಯ ಗಣಿ ಮಂತ್ರಾಲಯದಲ್ಲಿ ತಾಂತ್ರಿಕ ನಿರ್ದೇಶಕರಾಗಿ ಜವಾಬ್ದಾರಿಯನ್ನು ನಿರ್ವಹಿಸಿದ್ದಾರೆ. ಹವಾಮಾನ ಬದಲಾವಣೆಗೆ ಮೂಲಕಾರಣ ಶಿಲಾಪದರಗಳಲ್ಲಿ ಆಗುವ ಬದಲಾವಣೆ ಎಂಬ ಭೂವೈಜ್ಞಾನಿಕ ಅಂಶವನ್ನು ೪೦೦ಕ್ಕೂ ಮಿಗಿಲಾದ ಭಾಷಣಗಳು ಹಾಗೂ ಟಿ.ವಿ. ಮಾಧ್ಯಮಗಳ ಮೂಲಕ ಪ್ರಚಾರ ಪಡೆಸಿದ್ದಾರೆ.

ಸಾಹಿತ್ಯದಲ್ಲಿ ಆಸಕ್ತಿ ಹೊಂದಿದ್ದು ಹಲವಾರು ಕೃತಿಗಳನ್ನು ಅನುವಾದಿಸಿರುತ್ತಾರೆ. ಇವರ ಅನುವಾದ ಕೃತಿಗಳು. ಕೇಂದ್ರ ಸಾಹಿತ್ಯ ಅಕಾಡೆಮಿ, ಕುವೆಂಪು ಭಾಷಾಭಾರತಿ ಪ್ರಾಧಿಕಾರ ಮತ್ತು ನವಕರ್ನಾಟಕ ಪ್ರಕಾಶನದ ವತಿಯಿಂದ ಪ್ರಕಟವಾಗಿವೆ.

# ಪ್ರೊ. ಎಂ. ವಿ. ಸೀತಾರಾಮಯ್ಯ: ‘ಬದುಕು’ ಒಂದು ನೋಟ – ೭

– ಡಾ. ಪಿ.ವಿ. ನಾರಾಯಣ

ಬೆಂಗಳೂರಿನಲ್ಲಿ ಇದನ್ನು ಮುನ್ನಡೆಸಿದ ಸಂಘಟನೆಯೆಂದರೆ ಮುಖ್ಯವಾಗಿ ‘ಸಾಹಿತಿಗಳ ಕಲಾವಿದರ ಬಳಗ’. ಹೆಸರೇ ಹೇಳವಂತೆ ಬಹುತೇಕ ಬುದ್ಧಿಜೀವಿಗಳ ಬೆಂಬಲ ಪಡೆದ ಈ ಚಳವಳಿ ತುಂಬ ಪರಿಣಾಮಕಾರಿಯಾಗಿತ್ತು. ಎಲ್ಲ ಮುಖ್ಯ ಸಾಹಿತಿಗಳೂ ಚಲನಚಿತ್ರರಂಗದ ಸಮೇತ ಮತ್ತೆಲ್ಲ ಬಗೆಯ ಕಲಾವಿದರೂ ಇದಕ್ಕೆ ಬೆಂಬಲವಿತ್ತರು. ಎಂ.ವಿ. ಸೀತಾರಾಮಯ್ಯನವರು ಇದಕ್ಕೆ ಹೊರತಾಗಲಿಲ್ಲ. ತಮ್ಮ ನೈತಿಕ ಬೆಂಬಲದ ಜೊತೆಗೆ. ದೈಹಿಕವಾಗಿ ಸಾಧ್ಯವಾದಷ್ಟೂ ಮಟ್ಟಿಗೆ ನೇರ ಪಾಲುದಾರರೂ ಆದರು. ಚಳವಳಿ ನಾನಾ ರೂಪಗಳಲ್ಲಿ ನಡೆಯಿತು: ಸಾಹಿತಿಗಳು ಮತ್ತು ಕಲಾವಿದರ ಮೌನ ಮೆರವಣಿಗೆ, ಧರಣಿ, ಸರದಿ ಉಪವಾಸ, ಪಂಜಿನ ಮೆರವಣಿಗೆ, ೧೪೪ ನೇ ವಿಧಿಯ ಉಲ್ಲಂಘನೆ – ಹೀಗೆ. ಎಲ್ಲೆಲ್ಲಿಗೆ ಬರಲು ಸಾಧ್ಯವೋ ಅಲ್ಲೆಲ್ಲ ಎಂವಿಸೀ ಬಂದು ಪಾಲುದಾರರಾಗುತ್ತಿದ್ದರು. ಜೊತೆಗೆ, ‘ಈ ಕರುನಾಡಿದು ನನ್ನ ಮನೆ’ ಎಂಬ ತಮ್ಮ ಪುಸ್ತಕದ ಒಂದು ಸಾವಿರ ಪ್ರತಿಗಳನ್ನು ಅಚ್ಚು ಹಾಕಿಸಿ ಬಳಗಕ್ಕೆ ಕೊಟ್ಟು, ಅದರ ಮಾರಾಟದಿಂದ ಬರುವ ಹಣವನ್ನು ಚಳವಳಿಗೆ ಬಳಸಿಕೊಳ್ಳಲು ಹೇಳುವ ಮೂಲಕ ಆರ್ಥಿಕ ಸಹಾಯವನ್ನೂ ಚಳವಳಿಗೆ ನೀಡಿದರು. ಆಗ ಬಳಗ ಸ್ವಲ್ಪ ಕಾಲ ‘ಕನ್ನಡ ಕಲಿ’ ಎಂಬ ತಿಂಗಳ ಪತ್ರಿಕೆಯನ್ನು ಹೊರತರುತ್ತಿತ್ತು. ಇತರರ ಜೊತೆ ಅವರೂ ಕನ್ನಡ ಸಮಸ್ಯೆಗಳನ್ನು ಹಾಗೂ ಅವುಗಳ ಪರಿಹಾರೋಪಾಯಗಳನ್ನು ಕುರಿತಂತೆ ಅನೇಕ ಲೇಖನಗಳನ್ನೂ ಬರೆದರು; ಕರೆದಲ್ಲಿಗೆ ಕೈಲಾದ ಮಟ್ಟಿಗೆ ಹೋಗಿ ತಮ್ಮ ಕ್ಷೀಣದನಿಯಲ್ಲಿಯೇ ಅಭಿಮಾನದ ಕಿಚ್ಚು ಹೊತ್ತಿಸುವ ಭಾಷಣಗಳನ್ನು ಮಾಡುತ್ತಿದ್ದರು.

ಮುಂದೆ ಕೆಲ ಕಾಲದ ನಂತರ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಅಧ್ಯಕ್ಷರಿಂದ ನಡೆದಿದ್ದ ಹಣದ ದುರ್ವ್ಯವಹಾರಗಳ ವಿರುದ್ಧದ ಚಳವಳಿಯಲ್ಲಿಯೂ ಎಂ.ವಿ. ಸೀತಾರಾಮಯ್ಯನವರು ಸಕ್ರಿಯವಾಗಿ ತೊಡಗಿಕೊಂಡು ಸರ್ಕಾರದ ಮೇಲೆ ಒತ್ತಡ ತಂದು ಪರಿಷತ್ತಿಗೆ ಒಬ್ಬ ಆಡಳಿತಾಧಿಕಾರಿಯನ್ನು ನೇಮಿಸಿ, ಪರಿಷತ್ತಿನ ಅಧ್ಯಕ್ಷರ ಅವ್ಯವಹಾರಗಳ ತನಿಖೆಗಾಗಿ ಸರ್ಕಾರವು ನ್ಯಾಯಮೂರ್ತಿ ಶ್ಯಾಮಸುಂದರ್ ಆಯೋಗ ರಚನೆ ಮಾಡುವಷ್ಟು ಈ ಚಳವಳಿ ಪರಿಣಾಮಕಾರಿಯಾಗಿತ್ತು. ಹಾಗೆಯೇ ಪರಿಷತ್ತಿನ ಹಳೆಯ ಕಟ್ಟಡವನ್ನು ಕೆಡವಿ ಹೊಸ ಭವ್ಯ ಕಟ್ಟಡ ನಿರ್ಮಿಸಲು ಆಲೋಚಿಸಿದ್ದ ಪರಿಷತ್ತಿನ ತೀರ್ಮಾನದ ವಿರುದ್ಧ ಹೋರಾಡಿ, ಹಳೆಯ ಕಟ್ಟಡವನ್ನು ಪಾರಂಪರಿಕ ಕಟ್ಟಡವನ್ನಾಗಿ ಉಳಿಸಿಕೊಳ್ಳುವಲ್ಲಿಯೂ ಅವರು ವಹಿಸಿದ ಪಾತ್ರ ಮುಖ್ಯವಾದುದು. ಹೀಗೆ ಎಂವಿಸೀ ಸಾಹಿತ್ಯಕವಾಗಿ ಹೇಗೆ ಕೆಲಸ ಮಾಡಿದರೋ, ಕನ್ನಡಕ್ಕೆ ಅಗ್ರಸ್ಥಾನ ದೊರಕಿಸುವಲ್ಲಿ ಹಾಗೂ ಅನ್ಯಾಯಗಳ ವಿರುದ್ಧ ಹೋರಾಡುವಲ್ಲಿ ಅವಿರತವಾಗಿ ಹೋರಾಡಿದ್ದಾರೆ. ಹೀಗಾಗಿ ಅವರದ್ದು ಲೇಖಕ ಸಮೂಹದಲ್ಲಿ ಹೇಗೆಯೋ ಜನಸಾಮಾನ್ಯರ ನಡುವೆಯೂ ಎದ್ದು ಕಾಣುವ ವ್ಯಕ್ತಿತ್ವ.

ಮುಂದುವರೆಯುವುದು




**೨೫ನೇ ಆಗಸ್ಟ್ ೨೦೧೯ ರಂದು ನಡೆದ ೬ನೇ ವಾರ್ಷಿಕ ಸರ್ವಸದಸ್ಯರ ಸಭೆಯಲ್ಲಿ ಅವಿರೋಧವಾಗಿ ಚುನಾಯಿತರಾದ ಕಾರ್ಯಕಾರಿ ಸಮಿತಿ ಸದಸ್ಯರ ಜೊತೆ ಅಧ್ಯಕ್ಷರು**

# ಬಿ.ಎಂ.ಶ್ರೀ ಪ್ರತಿಷ್ಠಾನದ ಕಾರ್ಯಕ್ರಮಗಳು

**೨೮/೦೮/೨೦೧೯**

**ಸಾಹಿತ್ಯ ಸಂಚಲನ ೧೨**

**ಬಿಎಂಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ ಕರ್ನಾಟಕ ಲೇಖಕಿಯರ ಸಂಘದ ಕಾರ್ಯಕ್ರಮ**

ಅತಿಥಿ: ಜಿ.ಎನ್.ಮೋಹನ್



ಉಪನ್ಯಾಸದ ವಿಷಯ: ಎಕ್ಕುಂಡಿ ಎಂಬ ತೆರೆದ ಬಾಗಿಲು

ಇದೀಗ ಸಿಟಿಜ಼ನ್ ಎನ್ನುವ ಪದ ಮಾಯವಾಗಿ, ನೆಟಿಜ಼ನ್ ಪದ ರೂಢಿಗೆ ಬರುತ್ತಿದೆ. ಹಲವು ಪದಗಳು ಮಾಯವಾಗುತ್ತಿರುವ, ಬದಲಾಗುತ್ತಿರುವ ತಾಂತ್ರಿಕ ಯುಗದಲ್ಲಿ ಮನಗಳೂ ಕಳೆದು ಹೋಗುತ್ತಿವೆ. ಇಂತಹ ಸಮಯದಲ್ಲಿ ಸು.ರಂ. ಎಕ್ಕುಂಡಿಯವರನ್ನು ನೆನಪು ಮಾಡಿಕೊಳ್ಳುವುದೇ ಅವರಿಗೆ ಗೌರವ ತೋರಿದ ಹಾಗೆ. ೧೯೯೫, ಆಗಸ್ಟ್ ೨೦ರಂದು ಅವರು ವಿಧಿವಶರಾದರು. ಇಂದು ಅವರ ಬಗ್ಗೆ ಚಿಂತಿಸುವುದು ಸೂಕ್ತವಾಗಿದೆ ಎಂದು ಸಾಹಿತ್ಯ ಸಂಚಲನ ಕಾರ್ಯಕ್ರಮದ ಮುಖ್ಯ ಅತಿಥಿ, ಪ್ರಸಿದ್ಧ ಸಾಹಿತಿ ಜಿ.ಎನ್. ಮೋಹನ್‌ರವರು ತಮ್ಮ ಉಪನ್ಯಾಸವನ್ನು ಪ್ರಾರಂಭಿಸಿದರು. ಎಕ್ಕುಂಡಿಯವರು ಸಹಜ ಕವಿ, ಸಹೃದಯರು. ಅವರು ಎಲ್ಲರ ಬಗ್ಗೆ ವಿಶ್ವಾಸ ತೋರಿಸುತ್ತಿದ್ದರು. ಸ್ನೇಹಪರರು. ಎರಡು ದಂಡೆಗಳನ್ನು ಹತ್ತಿರಕ್ಕೆ ತರುವಂತಹ ಉದಾತ್ತ ವ್ಯಕ್ತಿ ಎಂದು ಹೇಳುತ್ತಾ ತಮಗೆ ಅವರಲ್ಲಿ ಬಹಳ ಆತ್ಮೀಯತೆ ಇತ್ತು ಎಂದೂ ಹೇಳಿದರು. ಅವರ ಕವನ, ಕವಿತೆ, ಕಾದಂಬರಿ ಹಾಗೂ ಬರಹಗಳ ಪರಿಚಯವನ್ನು ಸ್ವಾರಸ್ಯ ಪೂರ್ಣವಾಗಿ ವಿವರಿಸಿದರು.

ಅಂದಿನ ಸಭೆಯ ವಿಶೇಷವೆಂದರೆ ಎಕ್ಕುಂಡಿಯವರ ಮಕ್ಕಳಾದ ಭಾರತಿ, ರಂಗನಾಥ್ ಮತ್ತು ಡಾ.ವಾದಿರಾಜ್‌ರವರ ಉಪಸ್ಥಿತಿ.

ಬಿಎಂಶ್ರೀ ಪ್ರತಿಷ್ಠಾನ ಅಧ್ಯಕ್ಷರಾದ ಡಾ. ಆರ್. ಲಕ್ಷ್ಮೀನಾರಾಯಣರವರೂ ತಾವು ಎಕ್ಕುಂಡಿಯವರ ಕವಿತಾ ವಾಚನವನ್ನು ೧೯೭೦ರ ಸುವರ್ಣ ಸಾಹಿತ್ಯ ಸಮ್ಮೇಳನದಲ್ಲಿ ಕೇಳಿ ಆನಂದಿಸಿರುವುದಾಗಿ ತಮ್ಮ ಸವಿನೆನಪುಗಳನ್ನು ಸಭಿಕರೊಂದಿಗೆ ಹಂಚಿಕೊಂಡರು. ಮಾರ್ಕ್ಸ್ ಮತ್ತು ಮಧ್ವರನ್ನು ಒಟ್ಟೊಟಿಗೇ ತೆಗೆದುಕೊಂಡು ಹೋದ ಅವರು ಕೆಲವರಿಗೆ ಪ್ರಶ್ನೆಯಾದರೆ ಇನ್ನು ಕೆಲವರಿಗೆ ಸಂದೇಹವಾಗಿದ್ದರು. ಆದರೆ ಎಲ್ಲವನ್ನು ಮುಕ್ತವಾಗಿ ಆಹ್ವಾನಿಸುವ ತೆ-ರೆದ ಬಾಗಿಲಂತೂ ಆಗಿದ್ದರು ಎಂದು ಹೇಳಿದರು. ಇದೇ ಸಮಯದಲ್ಲಿ ಚಿತ್ರಗ್ರಾಹಕ ಮುಕುಂದ್‌ರವರು ಅವರ ಮತ್ತು ಎಕ್ಕುಂಡಿಯವರ ನಡುವಿನ ಬಾಂಧವ್ಯವನ್ನು ನೆನಪು ಮಾಡಿಕೊಂಡರು.

ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷೆ ವನಮಾಲಾ ಸಂಪನ್ನ ಕುಮಾರರವರು ಅಧ್ಯಕ್ಷೀಯ ನುಡಿಗಳನ್ನಾಡಿದರು. ಸಂಘದ ಮಾಜಿ ಅಧ್ಯಕ್ಷರುಗಳಾದ ಉಷಾ ಪಿ.ರೈ ಮತ್ತು ಡಾ.ಸಂಧ್ಯಾ ರೆಡ್ಡಿಯವರು ಸಭೆಯಲ್ಲಿ ಉಪಸ್ಥಿತರಿದ್ದರು. ಸಹಕಾರ್ಯದರ್ಶಿ ಜಿ.ವಿ.ನಿರ್ಮಲರವರ ನಿರೂಪಣೆ ಮತ್ತು ಸಂಘದ ಸದಸ್ಯೆ ಸವಿತಾ ನಾಗೇಶ್‌ರವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

**೨೨-೮-೨೦೧೯**

**ಅಕ್ಕರಗೊಟ್ಟಿ ಕಾರ್ಯಕ್ರಮ-೫೩**

ವಿಷಯ: ಟಿಪ್ಪುವಿನ ಮಕ್ಕಳ ಒತ್ತೆ, ಒಂದು ಜಿಜ್ಞಾಸೆ

ಚಾಲನೆ ನೀಡಿದವರು: ಡಾ. ಎಸ್.ಎಲ್.ಶ್ರೀನಿವಾಸ ಮೂರ್ತಿ. ವಿಜಯ ವಿಭಜಿತ ಪದವಿ ಪೂರ್ವ ಕಾಲೇಜು, ಬೆಂಗಳೂರು

ಚರ್ಚೆಗೆ ಮುನ್ನ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಆರ್.ಲಕ್ಷ್ಮೀನಾರಾಯಣ ಅವರು ಸಭೆಗೆ ಶ್ರೀನಿವಾಸ ಮೂರ್ತಿಯವರನ್ನು ಪರಿಚಯಿಸಿದರು. ಚರ್ಚೆಯನ್ನು ಆರಂಭಿಸಿದ ಡಾ ಶ್ರೀನಿವಾಸ ಮೂರ್ತಿಯವರು ಮೊದಲಿಗೆ ೧೮ನೇ ಶತಮಾನದ ಮೈಸೂರು ಸಂಸ್ಥಾನದ ಇತಿಹಾಸವನ್ನು ಸ್ಥೂಲವಾಗಿ ವಿವರಿಸಿದರು. ೧೭೯೨ರಲ್ಲಿ ನಡೆದ ಮೂರನೇ ಮೈಸೂರು ಯುದ್ಧದ ವಿಷಯವನ್ನು ವಿಶೇಷವಾಗಿ ಪ್ರಸ್ತಾಪಿಸಿ ಅದರ ಭಾಗವಾದ 'ಶ್ರೀರಂಗ ಪಟ್ಟಣದ ಒಪ್ಪಂದ'ವು ಚಾರಿತ್ರಿಕವಾಗಿ ಹೊಂದಿರುವ ಮಹತ್ವದ ಕಡೆಗೆ ಗಮನ ಸೆಳೆದರು. "ಸಂಧಿಯ ಒಂದು ಷರತ್ತಾಗಿ ಬ್ರಿಟಿಷರು ಟಿಪ್ಪುವಿನ ಮಕ್ಕಳನ್ನು ಒತ್ತಾಯದಿಂದ ತಮ್ಮ ಒತ್ತೆಯಾಳುಗಳಾಗಿ ಇರಿಸಿಕೊಂಡರು ಎಂಬ ಸಂಗತಿ ಎಲ್ಲ ಕಡೆ ಪ್ರಚಲಿತವಾಗಿದೆ. ಆದರೆ ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ಸಂಗ್ರಹದಲ್ಲಿದ್ದ, ಬಿದನೂರಿನ ಖಾಜಿಯಾದ ಮಿಸ್ಕಿನ್ ನಸೀರುದ್ದೀನ್ ಎಂಬಾತ ರಚಿಸಿದ 'ಜಂಗ್ ನಾಮಾ' ಎಂಬ ಕೃತಿಯಲ್ಲಿ ಬ್ರಿಟಿಷರು ಕೇಳಿದ ಮೂರು ಕೋಟಿ ರೂಗಳಷ್ಟು ಹಣ ಟಿಪ್ಪುವಿನ ಬಳಿಯಲ್ಲಿ ಇಲ್ಲದೆ ಇದ್ದುದರಿಂದ ಎರಡು ಕೋಟಿ ಹಣ' ಮತ್ತು ಒಂದ ಕೋಟಿಯ ಬದಲಿಗೆ ತನ್ನ ಇಬ್ಬರು ಮಕ್ಕಳನ್ನು ಒತ್ತೆಇಡುವುದಾಗಿ ಟಿಪ್ಪು ತಾನೇ ಪ್ರಸ್ತಾಪಿಸಿದ" ಎಂಬ ಸಂಗತಿಯನ್ನು ವಿಸ್ತೃತವಾಗಿ ತಿಳಿಸಿದರು. ಸಂಧಾನದ ಭಾಗವಾಗಿ ವ್ಯಕ್ತಿಗಳನ್ನು ಒತ್ತೆಯಾಗಿಡುವ ಪದ್ಧತಿಯ ಚಾರಿತ್ರಿಕ ಅಂಶಗಳ ಬಗ್ಗೆ ಅವರು ಹೆಚ್ಚಿನ ಬೆಳಕು ಚೆಲ್ಲಿದರು.

ಸಭೆಯಲ್ಲಿ ಹಾಜರಿದ್ದ ಅನೇಕ ಮಂದಿ ಇತಿಹಾಸಕ್ತರು ಉತ್ಸಾಹದಿಂದ ಚರ್ಚೆಯಲ್ಲಿ ಭಾಗವಹಿಸಿದರು. ಮೈಸೂರು ಸಂಸ್ಥಾನದ ಇತಿಹಾಸದಲ್ಲಿ ದಿವಾನ್ ಪೂರ್ಣಯ್ಯನವರ ಪಾತ್ರ, ಟಿಪ್ಪುವಿನ ರಾಜ ತಾಂತ್ರಿಕ ಸಾಮರ್ಥ್ಯ, ಮುಮ್ಮಡಿ ಕೃಷ್ಣ ರಾಜರ ಕಾಲದಲ್ಲಿ ಪೂರ್ಣಯ್ಯನವರು ನಡೆದು ಕೊಂಡ ರೀತಿ-ಇತ್ಯಾದಿ ಸಂಗತಿಗಳ ಬಗ್ಗೆ ಸಭಿಕರು ಸ್ವಾರಸ್ಯಕರವೂ, ಬೋಧ ಪ್ರದವೂ ಆದ ಚರ್ಚೆಯನ್ನು ನಡೆಸಿದರು. ಕಡೆಯಲ್ಲಿ ಪ್ರತಿಷ್ಠಾನದ ಕಾರ್ಯದರ್ಶಿ ಶ್ರೀ ಬಿ.ಆರ್. ರವೀಂದ್ರನಾಥ್ ಎಲ್ಲರನ್ನೂ ವಂದಿಸಿದರು.

**ದಿನಾಂಕ : ೦೯-೦೯-೨೦೧೯**

**ಅಕ್ಕರಗೊಟ್ಟಿ-೫೪**

ವಿಷಯ : ಶಿಕ್ಷಣ ಮತ್ತು ಭಾಷೆ : ಕೆಲವು ಪ್ರಶ್ನೆಗಳು

ಚಾಲನೆ : ಡಾ.ಎಚ್.ಎನ್.ಮುರಳೀಧರ್

ಚರ್ಚೆಗೆ ಮುನ್ನ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಆರ್.ಲಕ್ಷ್ಮೀನಾರಾಯಣ ಅವರು ಸಭೆಗೆ ಎಚ್.ಎನ್. ಮುರಳೀಧರ್ ಅವರನ್ನು ಪರಿಚಯಿಸಿದರು.



ಚರ್ಚೆಯ ವಿಷಯವನ್ನು ಹೀಗೆ ಮಂಡಿಸಲಾಯಿತು:

ನಾವು ಸಾಮಾನ್ಯವಾಗಿ ಶಿಕ್ಷಣವನ್ನು ಶಾಲೆಯೊಂದಿಗೆ ಸಮೀಕರಿಸುತ್ತೇವೆ. ಆದರೆ ಮುಖ್ಯವಾಗಿ ಶಿಕ್ಷಣವೆನ್ನುವುದು ಬದುಕಿನ ಸಂದರ್ಭದಲ್ಲಿ ಸಂಭವಿಸುತ್ತದೆ ಎಂದು

ಅರ್ಥೈಸಿಕೊಳ್ಳುವದಾದರೆ ಆಗ ನಮ್ಮ ಶೈಕ್ಷಣಿಕ ವ್ಯಾಕರಣವೇ ಬದಲಾಗುತ್ತದೆ. ಆಗ ಶಾಲೆ ಪರಿಸರದ ವಿಸ್ತರಣೆಯಾಗುತ್ತದೆ. ಶಾಲೆಗೂ ಸಹಜ ಕಲಿಕೆಯ ಪರಿಸರಕ್ಕೂ ನಡುವಿನ ಗೋಡೆಗಳನ್ನು ಒಡೆಯಬೇಕಾಗುತ್ತದೆ. ಆಗ ಭಾಷೆ ಕೇವಲ ಮಾಧ್ಯಮವಾಗದೆ ಅಸ್ತಿತ್ವವಾಗುತ್ತದೆ. ಒಂದು ಸಮುದಾಯದ ಆಲೋಚನೆಯ ವಿಧಾನಕ್ಕೂ ಆ ಜನರು ಆಡುವ ಭಾಷೆಯ ಸಂರಚನೆಗೂ ಸಂಬಂಧವಿರುವುದನ್ನು ಜಗತ್ತಿನಾದ್ಯಂತ ನಡೆದ ಅಧ್ಯಯನಗಳು ದೃಢೀಕರಿಸಿವೆ. ಹೀಗಾಗಿ ಮಕ್ಕಳು ಭಾಷೆಯ ಮೂಲಕ ಕಲಿಯುವುದಿಲ್ಲ; ಬದಲಾಗಿ ಭಾಷೆಯಲ್ಲಿ ಕಲಿಯುತ್ತಾರೆ.

ಈ ವಾಸ್ತವವನ್ನು ಶಿಕ್ಷಣ ಕ್ರಮದಲ್ಲಿ ಅನುಷ್ಠಾನಗೊಳಿಸಿದಾಗ ಮಾತ್ರ ಕಲಿಕೆ ಸೃಜನಶೀಲವಾಗಲು ಸಾಧ್ಯವಾಗುತ್ತದೆ. ಆದ್ದರಿಂದಲೇ ತನ್ನ ಪರಿಸರದ ನುಡಿಯಲ್ಲಿ ಕಲಿಯುವುದು ಪ್ರತಿಯೊಂದು ಮಗುವಿನ ಹಕ್ಕೆಂದು ಅಂತಾರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಲಾಗಿದೆ. ಈ ಚರ್ಚೆಯಲ್ಲಿ ಡಾ. ಆರ್. ಲಕ್ಷ್ಮೀನಾರಾಯಣ, ಡಾ. ವಿಜಯಾ ಸುಬ್ಬರಾಜ್, ಪ್ರೊ. ಅಬ್ದುಲ್ ಬಷೀರ್, ಮುಂತಾದವರು ಭಾಗವಹಿಸಿದ್ದರು. ಕೊನೆಯಲ್ಲಿ ಡಾ. ವಿಜಯಾ ಸುಬ್ಬರಾಜ್ ಎಲ್ಲರನ್ನೂ ವಂದಿಸಿದರು.

**ಕಿರುಪರಿಚಯ**

**ಶ್ರೀ ಸ್ವಾಮಿ ಪೊನ್ನಾಚಿ**

೧೯೮೬ರಲ್ಲಿ ಜನಿಸಿದ ಇವರು ಕೊಳ್ಳೇಗಾಲ ತಾಲೂಕಿನ ಪೊನ್ನಾಚಿಯವರು. ಸದ್ಯಕ್ಕೆ ಯಳಂದೂರಿನಲ್ಲಿ ಶಿಕ್ಷಕ ವೃತ್ತಿಯನ್ನು ಮಾಡುತ್ತಿದ್ದಾರೆ. 'ಸಾವೊಂದನು ಬಿಟ್ಟು' ಇವರ ಮೊದಲ ಕವನ ಸಂಕಲನ. ಈ ಕೃತಿ ೨೦೧೫ರಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರದಿಂದ ಪುರಸ್ಕೃತಗೊಂಡಿದೆ. ಜೊತೆಗೆ ಬೇಂದ್ರೆ ಗ್ರಂಥ ಬಹುಮಾನವೂ ದೊರಕಿದೆ.

ಇವರ ಹಲವಾರು ಕತೆ–ಕವನಗಳು ನಿಯತಕಾಲಿಕಗಳಲ್ಲಿ ಪ್ರಕಟಗೊಂಡಿವೆ. ಮಹದೇಶ್ವರ ಮತ್ತು ಮಂಟೇಸ್ವಾಮಿ ಕಾವ್ಯದ ಕುರಿತು ಇವರಿಗೆ ವಿಶೇಷ ಆಸಕ್ತಿಯಿದೆ. ಛಂದ ಪುಸ್ತಕ ಬಹುಮಾನ ಹಾಗೂ ಪಾಪು ಕಥಾ ಪುರಸ್ಕಾರ ಪಡೆದ 'ಧೂಪದ ಮಕ್ಕಳು' ಎಂಬ ಕೃತಿಗೆ ಇದೀಗ ಬಿ.ಎಂ.ಶ್ರೀ ಪ್ರತಿಷ್ಠಾನದ ಶಾ. ಬಾಲೂರಾವ್ ಯುವಬರಹಗಾರ ಎಂಬ ಪ್ರಶಸ್ತಿಯು ದೊರೆತಿದೆ.

**ಡಾ. ಚಂದ್ರಶೇಖರ ಕಂಬಾರ**



ಪ್ರತಿಷ್ಠಿತ ಜ್ಞಾನಪೀಠ ಪ್ರಶಸ್ತಿ ಪಡೆದಿರುವ ಡಾ. ಚಂದ್ರಶೇಖರ ಕಂಬಾರ (ಜನನ – ಜನವರಿ ೨, ೧೯೩೭) ಬೆಳಗಾವಿ ಜಿಲ್ಲೆ ಘೋಡಗೇರಿ ಗ್ರಾಮದಲ್ಲಿ ಬಸವಣ್ಣೆಪ್ಪ ಕಂಬಾರ ಹಾಗೂ ಚೆನ್ನಮ್ಮ ದಂಪತಿಯ ಪುತ್ರನಾಗಿ ಜನಿಸಿದರು. ೨೦೧೮ರಲ್ಲಿ ಡಾ. ಚಂದ್ರಶೇಖರ ಕಂಬಾರ ಅವರು ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ಚುನಾಯಿತರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಡಾ. ಚಂದ್ರಶೇಖರ ಕಂಬಾರ ಕಥೆಗಾರ, ಇದರ ಸರಿಯಾದ ರೂಪ– ಕವಿ, ಕಾದಂಬರಿಕಾರ, ನಾಟಕಕಾರ ಮತ್ತು ಜಾನಪದ ವಿದ್ವಾಂಸರೆಂದು ಹೆಸರಾಗಿರುವ ಡಾ. ಚಂದ್ರಶೇಖರ ಕಂಬಾರರುಬೆಂಗಳೂರು ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾಗಿ ಕರ್ನಾಟಕ ಜಾನಪದ ಅಕಾಡೆಮಿಯ ಅಧ್ಯಕ್ಷರಾಗಿ, ನವದೆಹಲಿಯ ರಾಷ್ಟ್ರೀಯ ನಾಟಕ ಶಾಲೆಯ ನಿರ್ದೇಶಕರಾಗಿ, ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಮೊದಲ ಕುಲಪತಿಗಳಾಗಿ ಕಾರ್ಯ ನಿರ್ವಹಿಸಿದ್ದಾರೆ. ೧೯೬೮–೬೯ರ ಅವಧಿಯಲ್ಲಿ ಚಿಕಾಗೊ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಅಧ್ಯಾಪಕರಾಗಿ ಕೂಡ ಸೇವೆ ಸಲ್ಲಿಸಿದ್ದಾರೆ ೨೦೦೪–೨೦೧೦ರವರೆಗೆ ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾಗಿದ್ದರು. ೨೦೧೯ ನೇ ಸಾಲಿನ ಧಾರವಾಡದಲ್ಲಿ ನಡೆದ ೮೪ ನೇಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದರು.

ಕೃತಿಗಳು ತುಂಬ. ಹತ್ತು ಕಾವ್ಯಕೃತಿಗಳು, ೨೫ ನಾಟಕ ಕೃತಿಗಳು, ೧ ಮಹಾಕಾವ್ಯ, ೫ ಕಾದಂಬರಿ ಅಲ್ಲದೆ ೧೭ ಬೇರೆಬೇರೆ ಗದ್ಯ ಸಂಪಾದನೆಗಳು, ಸಂಗ್ರಹಗಳು, ಪ್ರಬಂಧ ಸಂಕಲನಗಳು, ಸಂಶೋಧನ ಕೃತಿಗಳು ಪ್ರಕಟವಾಗಿವೆ. ಅವರ ಶಿಖರಸೂರ್ಯ ಕಾದಂಬರಿಗೆ ಕೇಂದ್ರಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿದೆ. ಅದಲ್ಲದೆ ಪಂಪ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿಯ ವಿಶೇಷ ಪುರಸ್ಕಾರಗಳು ಕೂಡ ಸಂದಿವೆ. ಅವರಿಗೆ ಸಲ್ಲಿಸಲಾದ ಅಭಿನಂದನ ಗ್ರಂಥ:–ಸಿರಿಸಂಪಿಗೆ.

**ಅವಲೋಕನ**

**ಗೌರಮ್ಮನ ವಚನಗಳು**

ಕೃತಿಕಾರರು:ರತ್ನಾ ಮೂರ್ತಿ (ಎಸ್ ಎಂ ನಾಗರತ್ನ )
ಪುಟ :೨೪೪, ಪ್ರಥಮ ಮುದ್ರಣ :೨೦೧೮
ಪ್ರಕಾಶಕರು:ಮಂಗಳಾ ಎಂಟರ್ಪ್ರೈಸಸ್
ಬೆಂಗಳೂರು
ದೂರವಾಣಿ ೯೫೩೨೫೮೭೪೨೬
ಬೆಲೆ:ರೂ ೨೦೦

ಕೃತಿಪರಿಚಯ : ಶಿಕ್ಷಣ , ಕಾವ್ಯ , ಕಥೆ , ಕಾದಂಬರಿ, ನಾಟಕ, ಮುಂಡಿಗೆಗಳು, ಸಮಾಜ ಸೇವೆ ಹೀಗೆ ಹಲವಾರು ಕ್ಷೇತ್ರಗಳಲ್ಲಿ ತೊಡಗಿಸಿಕೊಂಡು ಯಶಸ್ವಿಯಾಗಿರುವ ರತ್ನಾ ಮೂರ್ತಿ ಅವರು ಈಗ ವಚನಗಳ ರಚನೆಗೂ ಮುಂದಾಗಿದ್ದು ಇತ್ತೀಚೆಗೆ ಅವರ 'ಗೌರಮ್ಮನ ವಚನಗಳು' ಲೋಕಾರ್ಪಣೆಗೊಂಡಿದೆ ವಚನಗಳು ಕರ್ನಾಟಕದ ಸಂದರ್ಭದಲ್ಲಿ ಕ್ರಾಂತಿಯನ್ನುಂಟುಮಾಡಿದ ಸಾಹಿತ್ಯಪ್ರಕಾರ. ಜನಭಾಷೆಯನ್ನು ದೇವಭಾಷೆಯಾಗಿಸಿದ ಕೀರ್ತಿ ವಚನಗಳದ್ದು. ಕನ್ನಡವೇ ಸತ್ಯ ಎಂಬ ಶುದ್ಧ ಸಾಹಿತ್ಯಕ್ಕೆ ಮೀಸಲಾದ ವಾಟ್ಸಾಪ್ ವೇದಿಕೆಯಲ್ಲಿ ವಚನಕಾರ್ತಿ ರತ್ನ ಮೂರ್ತಿಯವರ ಗೌರಮ್ಮನ ವಚನಗಳು ದಿನಂಪ್ರತಿ ಸತತವಾಗಿ ಧಾರಾವಾಹಿಯಾಗಿ ಬರುತ್ತಿದ್ದಾಗ ವೇದಿಕೆಯ ಸದಸ್ಯರು ಅದನ್ನು ಅತ್ಯಂತ ಕುತೂಹಲದಿಂದ ಗಮನಿಸಿ, ವಚನಗಳು ಪ್ರವಹಿಸುತ್ತಿದ್ದ ವಿಚಾರಗಳಿಂದ ಮಂತ್ರಮುಗ್ದರಾಗಿದ್ದರು. ಗೌರಮ್ಮನ ವಚನಗಳು ಕೃತಿಯಲ್ಲಿ ಸಾವಿರಕ್ಕೂ ಮೀರಿದ ವಚನಗಳಿವೆ. ಸಾಮಾಜಿಕ ಕಳಕಳಿ ,ನಾಡು ನುಡಿ ಚಿಂತನೆ, ಜನರ ರೀತಿ, ಸಿರಿತನ–ಬಡತನ, ಶೀಲ, ಸದಾಚಾರ, ಗೆಳೆತನ, ಸಂಸಾರ ಮುಂತಾದ ವಿಸ್ತೃತವಾದ ವಿಷಯಗಳುಕೃತಿಯಲ್ಲಿ ಪದಗಳ ರೂಪ ಪಡೆದುಕೊಂಡಿವೆ. ಮಂಗಳಾಚರಣೆಯ ಭಾಗದಲ್ಲಿ ಸಂಸ್ಕೃತ ಪದಗಳೇ ಪ್ರಧಾನವಾದ ವಚನಗಳ ನಡುವೆಯೂ ಈ ಅಚ್ಚಗನ್ನಡ ವಚನವೊಂದು ಗಮನ ಸೆಳೆಯುತ್ತದೆ. : ಅಮ್ಮ ಮಹಾಲಕುಮಿ ನಮ್ಮ ಜನನಿಯು ಸುಗುಣಿ ಕಮ್ಮಿಯಿದ್ದಿತೆ ಬೆಳಕು ತಾನೇ ಪಡೆದವಳ ಜೀವನವೇ ನಮ್ಮಗಳ ಕೈಮರವು–ಗೌರಮ್ಮ ನಾಡು ನುಡಿಯ ಬಗ್ಗೆ ಅಭಿಮಾನ ಪ್ರೇರೇಪಿಸುವ ವಚನದಲ್ಲಿ ಕನ್ನಡ ಲಿಪಿಯ ಮಹತ್ವವನ್ನು ಸಾರುವ ಬಗೆ ಗಮನಾರ್ಹ. ಮುತ್ತು ನಾಚಿಸುವ ಲಿಪಿ ಚಿತ್ತಮೋಹಕ ಇಂಪು ಹತ್ತಿರಕೂ ಬಾರದು ನೆರೆಯಲಿಹುದು / ವಿಶ್ವಸಾಹಿತ್ಯದ ಎತ್ತರಕೆ ಬೆಳೆದಿಹುದು – ಗೌರಮ್ಮ ನಿಜ ಅಲ್ಲವೇ? ಕೃತಿಯುದ್ದಕ್ಕೂ ಇಂಥ ಚಿಂತನೆಗೆ ಹಚ್ಚುವ ವಚನಗಳು ಅನಾವರಣಗೊಂಡಿವೆ. ಗೌರಮ್ಮ ಯಾರು? ಎಂಬ ಸಂಶಯಕ್ಕೆ ಉತ್ತರವೂ ಕೊನೆಯ ವಚನದಲ್ಲಿ ಲಭಿಸುತ್ತದೆ. ಗೌರಮ್ಮನೆಲ್ಲಿಹಳು ಎಲ್ಲರೊಳಗೂ ಇಹಳು ಕಣ್ಣನಸು, ಕಿವಿ, ಹೃದಯ ತೆರೆದುಕೊಂಡವಳು ಸುಖ ದುಃಖ ಸಮಕಂಡು ಮಾಗಿದರೆ ಗೌರಮ್ಮ ಕಠಿಣ ಪದಗಳ ಅರ್ಥ ಹಾಗೂ ಪ್ರಾಸಂಗಿಕ ಕಥೆಗಳ ವಿವರಗಳು ವಚನಗಳ ಅರ್ಥದ ಹಾದಿಯನ್ನು ಸುಗಮಗೊಳಿಸಿವೆ. ಕಲಾವಿದ ಗಿರಿಧರ ಕಾರ್ಕಳ ಅವರ ಮುಖಪುಟ ಸುಂದರ ಹಾಗು ಅರ್ಥಪೂರ್ಣವಾಗಿದೆ. ಮುದ್ರಣ ಅಂದವಾಗಿದೆ . ಡಾ. ಅರಳುಮಲ್ಲಿಗೆ ಪಾರ್ಥಸಾರಥಿ ಹಾಗೂ ಡಾ .ರಾ.ವಿ. ಜಹಗೀರದಾರ ಅವರ ಉತ್ತಮ ಮುನ್ನುಡಿಯ ಪ್ರೋತ್ಸಾಹವಿದೆ .

**ಕೆ ಎನ್ ಮಹಾಬಲ ೯೪೪೯೮೧೧೧೭೭**

## ಅವಲೋಕನ

**ಓಲೆಗರಿಗಳ ಸಿರಿಯಲ್ಲಿ (ಗ್ರಂಥ ಸಂಪಾದನಾ ಲೇಖನಗಳ ಸಂಗ್ರಹ)**

ಲೇಖಕಿ : ಡಾ. ವೈ.ಸಿ. ಭಾನುಮತಿ
ಪ್ರಕಾಶಕರು : ಸಂವಹನ,
೧೨/೧ಎ, ಈರ್ವಿಂಗ್ ಬಜಾರ್ ಹಿಂಭಾಗ,
ಶಿವರಾಂ ಪೇಟೆ, ಮೈಸೂರು-೫೭೦೦೦೧
ಪುಟ- ೨೨೮, ರೂ. ೧೮೦/-
ಮೊದಲ ಮುದ್ರಣ-ಇಸವಿ ೨೦೧೮

ಮುಂದುವರೆದ ಭಾಗ-

ಇನ್ನು ಕನ್ನಡದಲ್ಲಿ ಗ್ರಂಥಸಂಪಾದನಾ ಶಾಸ್ತ್ರಕಾರರಾಗಿ ಶ್ರೇಷ್ಠ ಪ್ರಾಚೀನ ಗ್ರಂಥಗಳನ್ನು ಸಂಪಾದಿಸಿ ಉತ್ತಮ ಕೊಡುಗೆಗಳನ್ನು ನೀಡಿದ ಪ್ರಸಿದ್ಧ ಗ್ರಂಥ ಸಂಪಾದನಾಕಾರರ ಸಮಗ್ರ ಕೊಡುಗೆಯನ್ನು ಕುರಿತ ಲೇಖನಗಳು ಇಲ್ಲಿ ಬಂದಿವೆ. ಡಿ.ಎಲ್. ನರಸಿಂಹಾಚಾರ್ಯರ ಗ್ರಂಥ ಸಂಪಾದನೆಯ ಸಾಧನೆ ಗ್ರಂಥಸಂಪಾದನೆ. "ಹೆಚ್.ದೇವೀರಪ್ಪನವರ ಕೊಡುಗೆ. ಕಲಬುರ್ಗಿ ಅವರ ಗ್ರಂಥ ಸಂಪಾದನೆ, ವಿಧಿವಿಧಾನಗಳು ; ಎಚ್. ತಿಪ್ಪೇರುದ್ರಸ್ವಾಮಿ ಅವರ ಗ್ರಂಥಸಂಪಾದನಾ ಕೃತಿಗಳು ಲೇಖನಗಳು. ಆಯಾ ಗ್ರಂಥಸಂಪಾದನಾಕಾರರ ಕೊಡುಗೆಗಳ ಸಮಗ್ರಾವಲೋಕನವನ್ನು ಪರಿಚಯಿಸುವುದರ ಜೊತೆಗೆ ಅವರ ಗ್ರಂಥಸಂಪಾದನೆಯ ಬಗ್ಗೆ ವಿಮರ್ಶಾತ್ಮಕ ನೋಟಗಳು. ಪಾಠಾಂತರ ಚರ್ಚೆಗಳಿವೆ. ಇನ್ನು ಬಿಡಿಗ್ರಂಥಗಳ ವಿಮರ್ಶಾ ಲೇಖನಗಳು ಕೆಲವಿವೆ. ಕೆಳದಿ ಸಂಸ್ಥಾನದ ರಾಯರ ವಂಶಾವಳಿ, ಕೆಂಬಾವಿ ಭೋಗಣ್ಣನ ಸಾಂಗತ್ಯ ಸಂಪಾದನೆ, ನೀರಜಾಹನುವೇಂದ್ರ ಯಶೋವಿಲಾಸಂ ಕಾವ್ಯದ ಚಾರಿತ್ರಿಕ ನೆಲೆ. ಇವು ಏಕಗ್ರಂಥ ವಿಮರ್ಶೆಗಳಾಗಿವೆ ಮತ್ತು ಕನ್ನಡ ಸಾಹಿತ್ಯ ಚರಿತ್ರೆಗೆ ಸಂಬಂಧಿಸಿದಂತೆ, ಕನ್ನಡದಲ್ಲಿ ಜ್ಯೋತಿಷ್ಯಶಾಸ್ತ್ರ ಗ್ರಂಥಗಳು ತೋಂಟದ ಸಿದ್ಧಲಿಂಗೇಶ್ವರ ಸಮಗ್ರ ಸಾಹಿತ್ಯ ಸಂಪುಟಗಳು (೧೦) ಕನ್ನಡದಲ್ಲಿ ಬಾಹುಬಲಿ ಸಾಹಿತ್ಯ ಈ ಲೇಖನಗಳು ಸಾಹಿತ್ಯ ಚರಿತ್ರೆಯ ಅಭ್ಯಾಸಿಗಳಿಗೆ ಉಪಯುಕ್ತವಾಗಿವೆ. ಬಹುಮಟ್ಟಿಗೆ ಪರಿಚಯಾತ್ಮಕವಾಗಿವೆ. ಮಾಹಿತಿದೃಷ್ಟಿಯಿಂದ ಪ್ರಬಂಧಗಳನ್ನು ಮಂಡಿಸಿದ ವಿಚಾರಸಂಕಿರಣಗಳ ವಿವರಗಳನ್ನು ಸೂಚಿಸ ಬಹುದಾಗಿತ್ತು.

ಹೀಗೆ ಗ್ರಂಥಸಂಪಾದನಾ ಶಾಸ್ತ್ರಕ್ಕೆ ಕೊಡುಗೆ ನೀಡಿದವರ ಬಗ್ಗೆ ತಾಳೆಗರಿಗಳಿಂದ ಸಂಪಾದಿಸಿದ ಗ್ರಂಥಗಳು, ಅಚ್ಚಾದ ಗ್ರಂಥಗಳ ವಿಮರ್ಶೆ, ಸಾಹಿತ್ಯ ಚರಿತ್ರೆಯ ಸಮೀಕ್ಷಾರೂಪದ ಲೇಖನಗಳಿಂದ ಕೂಡಿದ ಭಾನುಮತಿ ಅವರ ಈ ಲೇಖನ ಸಂಗ್ರಹಗ್ರಂಥ ಆಕರಗ್ರಂಥವೆನಿಸುವ ಮಟ್ಟಿಗೆ ವಿಮರ್ಶಾನೋಟದ ಮೌಲ್ಯಮಾಪನದ ಗ್ರಂಥವಾಗಿದೆ.

ಇಡೀ ಗ್ರಂಥದಲ್ಲಿ ಎದ್ದು ಕಾಣುವ ಅಂಶವೆಂದರೆ ಭಾನುಮತಿಯವರು ಸೇವಾ ಜೀವಿತದ ಬಹುಭಾಗವನ್ನು ಗ್ರಂಥಸಂಪಾದನೆ ಕಾಯಕದಲ್ಲಿ ತೊಡಗಿದ ಅನುಭವ ಪಾಂಡಿತ್ಯಗಳ ಪ್ರತೀಕವಾಗಿ "ಓಲೆಗರಿಗಳ ಸಿರಿಯಲ್ಲಿ" ವಿಮರ್ಶಾಗ್ರಂಥ ಪ್ರಕಟವಾಗಿದೆ. ಸಾಹಿತ್ಯ ಚರಿತ್ರಾಸಕ್ತರು ಗ್ರಂಥಸಂಪಾದನಕಾರರು ಅಗತ್ಯವಾಗಿ ಗಮನಿಸಬೇಕಾದ ಗ್ರಂಥವಾಗಿದೆ.

– ಪ್ರೊ. ಜಿ. ಅಶ್ವತ್ಥನಾರಾಯಣ


HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2018-2020
dt. 27-10-2017
Office of Posting: Bangalore PSO, Bangalore 560026
Price :Annual Subscription Rs. 20/-
Date of publishing and Posting : 30-09-2019


## ೨೦೧೬-೨೦೧೯ ಅವಧಿಯಲ್ಲಿ ಸೇವೆ ಸಲ್ಲಿಸಿ ನಿವೃತ್ತರಾದ ಕಾರ್ಯಕಾರಿ ಸಮಿತಿ ಸದಸ್ಯರಿಗೆ ಧನ್ಯವಾದಗಳು.

### ನಿವೃತ್ತ ಸದಸ್ಯರ ವಿವರಗಳು



**ಡಾ.ಜಯಮ್ಮ ಕರಿಯಣ್ಣ** : ಲೋಕೋಪಯೋಗಿ ಇಲಾಖೆಯಲ್ಲಿ ಕಾರ್ಯ ವ್ಯವಸ್ಥಾಪಕರಾಗಿ ನಿವೃತ್ತರು. ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಕಾರ್ಯದರ್ಶಿ ಹಾಗೂ ಮಾಜಿ ಸಂಶೋಧನ ನಿರ್ದೇಶಕರು. ಹಲವಾರು ಸಂಸ್ಥೆಗಳಲ್ಲಿ ಸ್ವಯಂಪ್ರೇರಿತರಾಗಿ ಸೇವೆ ಸಲ್ಲಿಸಿರುತ್ತಾರೆ. ಇವರಿಗೆ ಹಲವಾರು ಪ್ರಶಸ್ತಿಗಳು ಬಂದಿವೆ.



**ಶ್ರೀ ಸಿ.ಕೆ ರಾಮೇಗೌಡ** : ಕನ್ನಡ ಪರ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು, ಹಲವಾರು ಸಂಘ ಸಂಸ್ಥೆಗಳಲ್ಲಿ ಈ ಹಿಂದೆ ಹಾಗೂ ಈಗ ಪದಾಧಿಕಾರಿಯಾಗಿದ್ದಾರೆ.



**ಶ್ರೀಮತಿ ಲಕ್ಷ್ಮಿ ಎನ್. ಮೂರ್ತಿ** : ಭರತನಾಟ್ಯ, ಶಾಸ್ತ್ರೀಯ ಸಂಗೀತ, ವಿದ್ವತ್ ಅಂತರಾಷ್ಟ್ರೀಯ ಸಾಂಸ್ಕೃತಿಕ ನಿರ್ದೇಶಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.



**ಡಾ. ನಳಿನಿ ವೆಂಕಟೇಶ್** : ೨೦೦೨ರಲ್ಲಿ 'ರನ್ನನ ಮೇಲೆ ಪಂಪನ ಪ್ರಭಾವ' ಎಂಬ ಪ್ರಬಂಧ ಮಂಡಿಸಿ ಬೆಂಗಳೂರು ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಪದವಿ ಪಡೆದಿದ್ದಾರೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಪ್ರಕಟಿಸಿರುವ 'ಸಮಗ್ರ ದಾಸ ಸಾಹಿತ್ಯ'ದ ೨೧ನೇ ಸಂಪುಟದ ಸಂಪಾದಕಿ. ದೂರದರ್ಶನ ಮತ್ತು ಆಕಾಶವಾಣಿ ಕಾರ್ಯಕ್ರಮಗಳಲ್ಲಿ ಭಾಗವಹಿಸಿರುತ್ತಾರೆ.


**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath


**ಅಚ್ಚಾದ ಪುಸ್ತಕ** ತೆರೆದ-ಅಂಚೆ

ಶ್ರೀಮತಿ/ಶ್ರೀ.......................................................................

.......................................................................

.......................................................................


ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭